ನವಸಾಕ್ಷರ ಪುಸ್ತಕ ಮಾಲೆ ೩೯

# ಯಕ್ಷಪ್ರಶ್ನೆ - ಏಕಲವ್ಯ

ಮಹಾಬಲೇಶ್ವರ ರಾವ್








ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಲೋಕಶಿಕ್ಷಣ ನಿರ್ದೇಶನಾಲಯ
ನವಸಾಕ್ಷರ ಪುಸ್ತಕ ಮಾಲೆ—೩೯

# ಯಕ್ಷಪ್ರಶ್ನೆ–ಏಕಲವ್ಯ

ಮಹಾಬಲೇಶ್ವರ ರಾವ್








ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ
ಹಂಪಿ—೫೮೩ ೨೧೧

**YAKSHAPRASHNE–EIKALAVYA :** By Mahabaleshwara Rao. Published by The Director of Prasaranga, Kannada University, Hampi – 583 211, KARNATAKA. First Impression 1994, Pp. ii + 26, Rs. 8.00

---



**ಸಂಯೋಜನಾಧಿಕಾರಿ**
ಎಚ್.ಎಸ್.ಶ್ರೀಮತಿ
ಪಠ್ಯಪುಸ್ತಕ ರಚನಾ ವಿಭಾಗ

ಪ್ರಕಾಶಕರು
ನಿರ್ದೇಶಕರು
ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ
ಹಂಪಿ—೫೮೩ ೨೧೧

ಮುಖಪುಟ ವಿನ್ಯಾಸ
ಕೆ. ಮಕಾಳಿ

ಬೆಲೆ: ರೂ ೮.೦೦

ಮುದ್ರಕರು
ಅಭಿಮಾನಿ ಪ್ರಕಾಶನ
೯೬, ಡಾ.ರಾಜಕುಮಾರ್ ರಸ್ತೆ,
ರಾಜಾಜಿನಗರ,
ಬೆಂಗಳೂರು—೫೬೦ ೦೨೧




# ಯಕ್ಷಪ್ರಶ್ನೆ

ಕೌರವ ಪಾಂಡವರು ಜೂಜಾಟ ಆಡಿದರು. ಜೂಜಾಟದಲ್ಲಿ ಸೋತವರು ಹನ್ನೆರಡು ವರ್ಷ ಕಾಡಿನಲ್ಲಿ ವಾಸಿಸಬೇಕು. ಒಂದು ವರ್ಷ ಯಾರ ಕಣ್ಣಿಗೂ ಬೀಳದಂತೆ ಬದುಕಬೇಕು. ಅಂದರೆ 'ಅಜ್ಞಾತವಾಸ' ನಡೆಸಬೇಕು. ಇದು ಕರಾರು ಕಪಟದ ಜೂಜಿನಲ್ಲಿ ಪಾಂಡವರು ಸೋತರು. ಕರಾರಿನಂತೆ ಕಾಡಿಗೆ ಹೋದರು.

ಪಾಂಡವರ ಹನ್ನೆರಡು ವರ್ಷದ ವನವಾಸ ಇನ್ನೇನು ಮುಗಿಯಿತು. ಆಗ ಒಂದು ಘಟನೆ ನಡೆಯಿತು. ಒಂದು ದಿನ ಧರ್ಮರಾಯನು ತಮ್ಮಂದಿರ ಜೊತೆ ಕುಳಿತು ಮಾತನಾಡುತ್ತಿದ್ದ. ಆಗ ಅಲ್ಲಿಗೆ ಓರ್ವ ಬ್ರಾಹ್ಮಣ ಓಡುತ್ತ ಬಂದ. ಅವನು ಧರ್ಮರಾಯನಲ್ಲಿ ತನ್ನ ಕಷ್ಟವನ್ನು ತೋಡಿಕೊಂಡ. ''ಹೋಮಕ್ಕೆ ಬೇಕಾದ ಅರಣಿಯನ್ನು ಮರದ ಕೊಂಬೆಗೆ ತಗಲಿ ಹಾಕಿದ್ದೆ. ಆದರೆ ಜಿಂಕೆಯೊಂದು ಅರಣಿಯನ್ನು ಎತ್ತಿಕೊಂಡು ಓಡಿಹೋಯಿತು. ದಯವಿಟ್ಟು ನೀನು ಅದನ್ನು ತಂದುಕೊಡು.'' ಹೀಗೆಂದು ಬ್ರಾಹ್ಮಣನು ಧರ್ಮರಾಯನನ್ನು ಬೇಡಿಕೊಂಡನು.

ಇನ್ನೊಬ್ಬರ ಕಷ್ಟದಲ್ಲಿ ಕ್ಷತ್ರಿಯರಾಗಿ ಸಹಾಯ ಮಾಡದಿದ್ದರೆ ಹೇಗೆ? ಪಾಂಡವರು ಬಿಲ್ಲು ಬಾಣ ಹಿಡಿದು ಜಿಂಕೆಯನ್ನು ಬೆನ್ನಟ್ಟಿದರು. ಬಾಣಗಳ ಮೇಲೆ




ಕೌರವರು ಪಾಂಡವರು ಜೂಜಾಡುತ್ತಿರುವುದು

ಬಾಣಗಳನ್ನು ಹೊಡೆದರು. ಆದರೆ ಅದು ಮಾಯಾ ಜಿಂಕೆ. ಇವರು ಬಿಟ್ಟ ಬಾಣಗಳು ಅದಕ್ಕೆ ನಾಟಲಿಲ್ಲ. ಜಿಂಕೆ ಕಣ್ಣಿಗೆ ಕಾಣದಂತೆ ಮರೆಯಾಯಿತು.

ಪಾಂಡವರು ಆಶ್ರಮದಿಂದ ಬಲು ದೂರ ಬಂದಿದ್ದರು. ಅವರು ಹಸಿವು, ಬಾಯಾರಿಕೆಗಳಿಂದ ಕಂಗೆಟ್ಟಿದ್ದರು. ಮರದ ನೆರಳಿನಲ್ಲಿ ವಿಶ್ರಾಂತಿಗಾಗಿ ಕುಳಿತರು. ನಕುಲ ಆ ಮರವನ್ನು ಏರಿ ನೋಡಿದ. ದೂರದಲ್ಲಿರುವ ಒಂದು ಕೊಳ ಅವನಿಗೆ ಕಾಣಿಸಿತು. ಅವನು ಮರದಿಂದ ಕೆಳಗೆ ಇಳಿದ. ಧರ್ಮರಾಯನಿಗೆ ವಿಷಯ ತಿಳಿಸಿದ. ಧರ್ಮರಾಯನು ''ನೀನು ಹೋಗಿ ಆ ಕೊಳದ ನೀರನ್ನು ಕುಡಿ. ಬಳಿಕ ಕಮಲದ ಎಲೆಯ ಪೊಟ್ಟಣ ಕಟ್ಟು. ಅದರಲ್ಲಿ ನಮಗಾಗಿ ನೀರು ತಾ'' ಎಂದು ಹೇಳಿದನು.

ನಕುಲ ಕೊಳದ ಬಳಿಗೆ ಬಂದನು. ಕೊಳದ ನೀರನ್ನು ಕಂಡನು. ಅವನಿಗೆ ಸಂತೋಷವಾಯಿತು. ಅವನು ಕೊಳದಲ್ಲಿ ಇಳಿದನು. ಕೈ ಕಾಲು ಮುಖ ತೊಳೆದನು. ಬೊಗಸೆಯಲ್ಲಿ ನೀರನ್ನು ಮೊಗೆದನು. ಇನ್ನೇನು ನೀರನ್ನು ಕುಡಿಯಬೇಕು. ಆಗ ಒಂದು ಧ್ವನಿ ಕೇಳಿ ಬಂದಿತು. ಮೋಡಗಳ ಗುಡುಗಿನಂಥ ಧ್ವನಿ. ''ಇದು ನನ್ನ ಕೊಳ. ಮೊದಲು ನನ್ನ ಪ್ರಶ್ನೆಗಳಿಗೆ ಉತ್ತರ ಹೇಳು. ಬಳಿಕ ನೀರು ಕುಡಿ.'' ನಕುಲನಿಗೆ ಮೊದಲೇ ವಿಪರೀತ ಬಾಯಾರಿಕೆ ಆಗಿತ್ತು. ಹಾಗಾಗಿ ಅವನು ಈ ಮಾತನ್ನು ಅಲಕ್ಷಿಸಿದ. ನೀರು ಕುಡಿದ. ಧೊಪ್ಪನೆ ಕೆಳಕ್ಕೆ ಬಿದ್ದುಬಿಟ್ಟ.

ಎಷ್ಟು ಹೊತ್ತಾದರೂ ನಕುಲ ಮರಳಿ ಬರಲಿಲ್ಲ. ಆಗ ಧರ್ಮರಾಯನು ಸಹದೇವನನ್ನು ಕಳುಹಿಸಿದ. ಸಹದೇವ ಕೊಳದ ಬಳಿಗೆ ಬಂದ. ಕೆಳಗೆ ಬಿದ್ದಿರುವ ನಕುಲನನ್ನು ಕಂಡ. ''ಮೊದಲು ನೀರು ಕುಡಿಯವೋ. ಬಳಿಕ ನಕುಲನನ್ನು ಎಬ್ಬಿಸುವೆ.'' ಹೀಗೆಂದುಕೊಂಡ ಸಹದೇವ ನೀರು ಕುಡಿಯಲು ಹೊರಟಾಗ ಮತ್ತೆ ಅದೇ ಧ್ವನಿ. ನಕುಲನಂತೆ ಸಹದೇವನೂ ಆ ಧ್ವನಿಯನ್ನು ಅಲಕ್ಷಿಸಿದ. ನೀರು ಕುಡಿದು ಬಿದ್ದುಬಿಟ್ಟ.

ಸಹದೇವ ಮರಳಿ ಬರಲಿಲ್ಲ. ಆಗ ಧರ್ಮರಾಯ ಅರ್ಜುನನನ್ನು ಕಳುಹಿಸಿದ. ನಕುಲ ಸಹದೇವರು ಕೊಳದ ಬಳಿ ಬಿದ್ದಿರುವುದನ್ನು ಅರ್ಜುನನು ನೋಡಿದನು. ''ಮೊದಲು ನಾನು ನೀರು ಕುಡಿಯುವೆ. ಬಳಿಕ ಇವರ ಮುಖಕ್ಕೆ ನೀರು ಚಿಮುಕಿಸುವೆ''



ಪಾಂಡವರು ಕಾಡಿಗೆ ಹೋಗುತ್ತಿರುವುದು

ಎಂದು ಅವನು ಯೋಚಿಸಿದನು. ಕೊಳದ ನೀರನ್ನು ಬೊಗಸೆಯಲ್ಲಿ ಎತ್ತಿಕೊಂಡನು. ಮತ್ತೆ ಅದೇ ಧ್ವನಿ ಮೊಳಗಿತು. ಅರ್ಜುನನು ''ಯಾರು ನೀನು? ಧೈರ್ಯವಿದ್ದರೆ ಮುಂದೆ ಬಾ. ನಿನ್ನ ಹುಟ್ಟು ಅಡಗಿಸುತ್ತೇನೆ'' ಎಂದು ಗುಡುಗಿದನು. ಯಾರೂ ಮುಂದೆ ಬರಲಿಲ್ಲ. ಅವನ ಮಾತಿಗೆ ಉತ್ತರವೂ ದೊರೆಯಲಿಲ್ಲ. ಬಾಯಾರಿಕೆ ತಾಳಲಾರದೆ ಅರ್ಜುನನು ನೀರು ಕುಡಿದನು. ಧೊಪ್ಪನೆ ಬಿದ್ದುಬಿಟ್ಟನು. ಇದಾದ ಬಳಿಕ ಬಂದ ಭೀಮನಿಗೂ ಇದೇ ಗತಿಯಾಯಿತು.

ತಮ್ಮಂದಿರು ಯಾರೂ ಬರದಿದ್ದಾಗ ಧರ್ಮರಾಯನು ಬೇಸರಗೊಂಡನು. ''ಇಂದಿಗೆ ಚಂದ್ರವಂಶ ಕೊನೆಯಾಯಿತು. ಕೌರವನ ಛಲಕ್ಕೆ ಗೆಲುವಾಯಿತು.'' ಎಂದು ಅವನು ಚಿಂತಿಸಿದನು. ತಡಮಾಡದೆ ಕೊಳದ ಬಳಿಗೆ ಬಂದನು. ಕೊಳದ ಬಳಿ ಬಿದ್ದಿದ್ದ ತಮ್ಮಂದಿರನ್ನು ಕಂಡನು. ''ಇವರ ಮೈಮೇಲೆ ಒಂದಿಷ್ಟೂ ಗಾಯವಿಲ್ಲ. ಆಯುಧದ ಪೆಟ್ಟಿಲ್ಲ. ಏಕೆ ಹೀಗೆ ಬಿದ್ದಿದ್ದಾರೆ? ಯಾರು ಇವರನ್ನು ಈ ಸ್ಥಿತಿಗೆ ತಂದವರು? ಯಾವುದಕ್ಕೂ ಮೊದಲು ನೀರು ಕುಡಿಯುವೆ. ಬಳಿಕ ಯೋಚಿಸುವೆ'' ಎಂದು ಕೊಂಡ ಧರ್ಮರಾಯ.

ನೀರನ್ನು ಕುಡಿಯಬೇಕು ಎನ್ನುವಾಗ ಮತ್ತೆ ಅದೇ ಧ್ವನಿ. ''ಅಯ್ಯಾ, ನಿನ್ನ ತಮ್ಮಂದಿರು ಅವಿವೇಕಿಗಳು. ಅವರು ನನ್ನ ಮಾತನ್ನು ಕೇಳಲಿಲ್ಲ. ನೀನಾದರೋ ವಿವೇಕಿ. ಮೊದಲು ನಾನು ಕೇಳುವ ಪ್ರಶ್ನೆಗಳಿಗೆ ಉತ್ತರ ಹೇಳು. ಆ ಬಳಿಕ ನೀರು ಕುಡಿ'' ಎಂದು ಆ ಧ್ವನಿ ನುಡಿಯಿತು.

ಆಗ ಧರ್ಮರಾಯನು ''ಯಾರಯ್ಯಾ ನೀನು? ರಾಕ್ಷಸನೋ? ಕಿನ್ನರನೋ? ಯಕ್ಷನೋ? ಗಂಧರ್ವನೋ? ನೀನು ಇರುವುದೆಲ್ಲಿ? ಯಾಕೆ ನನ್ನ ತಮ್ಮಂದಿರಿಗೆ ಈ ಶಿಕ್ಷೆ?'' ಎಂದು ಕೇಳಿದನು. ಆಗ ಆ ಧ್ವನಿಯು ''ನಾನು ಯಕ್ಷ. ಈ ಕೊಳ ನನ್ನದು. ನನ್ನ ಪ್ರಶ್ನೆಗಳಿಗೆ ಸರಿಯಾದ ಉತ್ತರ ಕೊಡು'' ಎಂದು ಹೇಳಿ ಕಾಣೆಸಿಕೊಂಡನು. ಧರ್ಮರಾಯನು ''ನನ್ನ ಬುದ್ಧಿಗೆ ಹೊಳೆದಂತೆ ಉತ್ತರ ಹೇಳುವೆ. ನೀನು ನಿನ್ನ ಪ್ರಶ್ನೆ ಕೇಳು'' ಎಂದನು.




ಬ್ರಾಹ್ಮಣ ಧರ್ಮರಾಯನಲ್ಲಿ ಬೇಡಿಕೊಳ್ಳುತ್ತಿರುವುದು

ಯಕ್ಷ : ''ಭೂಮಿಗಿಂತ ದೊಡ್ಡದು ಯಾವುದು? ಆಕಾಶಕ್ಕಿಂತ ಎತ್ತರವಾದದ್ದು ಯಾವುದು? ಗಾಳಿಗಿಂತ ವೇಗವಾಗಿರುವುದು ಯಾವುದು?''

ಧರ್ಮರಾಯ : ''ಭೂಮಿಗಿಂತ ದೊಡ್ಡ ವಸ್ತು ತಾಯಿ. ಆಕಾಶಕ್ಕಿಂತ ಎತ್ತರವಾದ ವಸ್ತು ತಂದೆ. ಗಾಳಿಗಿಂತ ವೇಗವಾದುದು ಮನುಷ್ಯನ ಮನಸ್ಸು.''

ಯಕ್ಷ : ''ಸಾಗರಕ್ಕೆ ಸರಿಸಾಟಿ ಯಾವುದು? ಮನುಷ್ಯರಿಗೆ ಯಾವುದು ತಾಯಿ ಸಮಾನ? ಸೂರ್ಯಕಿರಣಕ್ಕೆ ಸರಿಸಮಾನ ಯಾವುದು?''

ಧರ್ಮರಾಯ : ''ಆಕಾಶವು ಸಾಗರಕ್ಕೆ ಸರಿಸಮಾನ. ಗೋಮಾತೆ ಮಾನವರಿಗೆ ತಾಯಿ ಸಮಾನ. ಸತ್ಯವೇ ಸೂರ್ಯಕಿರಣಕ್ಕೆ ಸರಿಸಾಟಿ.''

ಯಕ್ಷ : ''ಧರ್ಮವು ಮುಖ್ಯವಾಗಿ ಇರುವುದು ಎಲ್ಲಿ? ಯಶಸ್ಸು ಮುಖ್ಯವಾಗಿರುವುದು ಎಲ್ಲಿ? ಸ್ವರ್ಗವು ಎಲ್ಲಿರುವುದು? ಸುಖವು ಯಾವುದರಲ್ಲಿದೆ?''

ಧರ್ಮರಾಯ : ''ಧರ್ಮವು ದಕ್ಷತೆಯಲ್ಲಿದೆ. ಯಶಸ್ಸು ಮುಖ್ಯವಾಗಿ ದಾನಮಾಡುವುದರಲ್ಲಿ ಇದೆ. ಸ್ವರ್ಗವು ಸತ್ಯದಲ್ಲಿದೆ. ಸುಖವು ಶೀಲದಲ್ಲಿದೆ.''

ಯಕ್ಷ : ''ಧನದಲ್ಲಿ ಉತ್ತಮವಾದುದು ಯಾವುದು? ಲಾಭದಲ್ಲಿ ಉತ್ತಮವಾದುದು ಯಾವುದು? ಸುಖದಲ್ಲಿ ಉತ್ತಮವಾದ ಸುಖ ಯಾವುದು?''

ಧರ್ಮರಾಯ : ''ವಿದ್ಯಾ ಧನವು ಉತ್ತಮವಾದ ಧನ. ಆರೋಗ್ಯವೇ ಉತ್ತಮವಾದ ಲಾಭ. ತೃಪ್ತಿಯೇ ಅತ್ಯುತ್ತಮವಾದ ಸುಖ.''



ಪಾಂಡವರು ನೀರು ಕುಡಿದು ಕೊಳದ ಬಳಿ ಬಿದ್ದಿರುವುದು

ಯಕ್ಷ : "ಯಾವುದನ್ನು ಬಿಟ್ಟರೆ ಮನುಷ್ಯನು ಎಲ್ಲರಿಗೆ ಬೇಕಾದವನು? ಯಾವುದನ್ನು ಬಿಟ್ಟರೆ ಹಣವಂತನಾಗುತ್ತಾನೆ? ಯಾವುದನ್ನು ಬಿಟ್ಟರೆ ಸುಖಿ ಆಗುತ್ತಾನೆ? ಯಾವುದನ್ನು ಬಿಟ್ಟರೆ ದುಃಖವಾಗುವುದಿಲ್ಲ?"

ಧರ್ಮರಾಯ : "ಗರ್ವವನ್ನು ಬಿಟ್ಟವನೇ ಎಲ್ಲರಿಗೂ ಬೇಕಾದವನು. ಆಸೆಯನ್ನು ಬಿಟ್ಟರೆ ಮನುಷ್ಯನು ಹಣವಂತನಾಗುತ್ತಾನೆ. ಜಿಪುಣತನ ಬಿಟ್ಟವನು ಸುಖವಾಗಿ ಬದುಕುತ್ತಾನೆ. ಸಿಟ್ಟನ್ನು ಬಿಟ್ಟರೆ ದುಃಖ ಉಂಟಾಗುವುದಿಲ್ಲ."

ಯಕ್ಷ : "ಮಹಾಪುರುಷನು ಯಾರು? ದೇವರಿಗೆ ಪ್ರಿಯನಾದವನು ಯಾರು? ಕೆಟ್ಟವನು ಯಾರು?"

ಧರ್ಮರಾಯ : "ಅಹಿಂಸೆಯಲ್ಲಿ ತೊಡಗಿದವನು ಮಹಾಪುರುಷ. ಪರೋಪಕಾರಿಯೇ ದೇವರಿಗೆ ಬೇಕಾದವನು. ಪರರ ಏಳಿಗೆಯನ್ನು ಕಂಡು ಕರುಬುವವನೇ ಕೆಟ್ಟವನು."

ಯಕ್ಷ : "ತೆಗಳಿಕೆಗೆ ಯೋಗ್ಯನಾದವನು ಯಾರು? ಬದುಕಿಯೂ ಸತ್ತಂತಿರುವವನು ಯಾರು? ದೇಶಕ್ಕೆ ಅಪಕಾರಿ ಯಾರು?"

ಧರ್ಮರಾಯ : "ಇನ್ನೊಬ್ಬರನ್ನು ತೆಗಳುವವನೇ ತೆಗಳಿಕೆಗೆ ಯೋಗ್ಯನು. ಇನ್ನೊಬ್ಬರಿಗೆ ಒಳ್ಳೆಯದನ್ನು ಮಾಡುವವನೇ ಹೊಗಳಿಕೆಗೆ ಯೋಗ್ಯನು. ಬಡವನೇ ಬದುಕಿಯೂ ಸತ್ತಂತಿರುವವನು. ತನ್ನಿಚ್ಛೆಯಂತೆ ನಡೆಯುವ ರಾಜನೇ ದೇಶಕ್ಕೆ ಅಪಕಾರಿ."





ಧರ್ಮರಾಯ ಮತ್ತು ಯಕ್ಷನ ಮಧ್ಯೆ ಪ್ರಶ್ನೋತ್ತರ

ಧರ್ಮರಾಯನು ಕೊಟ್ಟ ಉತ್ತರಗಳಿಂದ ಯಕ್ಷನಿಗೆ ತೃಪ್ತಿಯಾಯಿತು. ''ಅಯ್ಯಾ ಧರ್ಮರಾಯ, ಮೆಚ್ಚಿದೆ ನಿನ್ನ ಬುದ್ಧಿಗೆ, ವಿವೇಕಕ್ಕೆ. ನಿನ್ನ ತಮ್ಮಂದಿರಲ್ಲಿ ಒಬ್ಬನನ್ನು ಬದುಕಿಸುವೆ. ಯಾರನ್ನು ಬದುಕಿಸಬೇಕು ಹೇಳು'' ಎಂದು ಯಕ್ಷನು ನುಡಿದನು.

ಧರ್ಮರಾಯನು ''ನಕುಲನು ಬದುಕಲಿ'' ಎಂದನು. ನಕುಲನು ಚೇತರಿಸಿಕೊಂಡು ಮೈ ಮುರಿದು ಎದ್ದನು. ಆಗ ಯಕ್ಷನು ''ಇನ್ನೊಬ್ಬ ತಮ್ಮನನ್ನು ಬದುಕಿಸುವೆ. ಯಾರನ್ನು ಬದುಕಿಸಲಿ?'' ಎಂದು ಕೇಳಿದನು.

''ಸಹದೇವ ಬದುಕಲಿ'' ಎಂದನು ಧರ್ಮರಾಯ.

ಸಹದೇವನೂ ಬದುಕಿದನು. ಆದರೆ ಯಕ್ಷನಿಗೆ ಧರ್ಮರಾಯನ ಮಾತು ಕೇಳಿ ಆಶ್ಚರ್ಯವಾಯಿತು. ಅವನು ಧರ್ಮರಾಯನೊಡನೆ ಹೀಗೆಂದನು. ''ಭೀಮ, ಅರ್ಜುನರು ನಿನ್ನ ಒಡಹುಟ್ಟಿದವರು. ನೀನು ಅವರಿಗೆ ಬಹಳ ಬೇಕಾದವನು. ಭೀಮನೆಂದರೆ ನಿನಗೆ ತುಂಬಾ ಪ್ರೀತಿ. ಅರ್ಜುನನೇ ನಿಮ್ಮೆಲ್ಲರಿಗೆ ದಿಕ್ಕು. ಹೀಗಿರುವಾಗ ನೀನು ಮಾದ್ರಿಯ ಮಕ್ಕಳು ಬದುಕಲಿ ಎಂದೇಕೆ ಕೇಳಿದೆ?'' ಅದಕ್ಕೆ ಧರ್ಮರಾಯನು ''ಮಾದ್ರಿದೇವಿಯು ಸಾಯುವುದಕ್ಕೆ ಮೊದಲು ನನ್ನನ್ನು ಬಳಿಗೆ ಕರೆದಳು. 'ನನ್ನ ಮಕ್ಕಳ ನೋವು, ಕೇಡು ನಿನ್ನದು. ನೀನೇ ಅವರನ್ನು ಸಾಕಿ ಸಲಹಬೇಕು. ಭೇದ ಭಾವ ಎಣಿಸಬೇಡ' ಎಂದು ನನ್ನಲ್ಲಿ ನುಡಿದಳು. ಆದುದರಿಂದ ಮಾದ್ರಿಯ ಮಕ್ಕಳನ್ನು ಹೇಗೆ ತಾನೇ ಮರೆಯಲಿ'' ಎಂದನು. ಧರ್ಮರಾಯನ ಮಾತುಗಳಿಗೆ ಯಕ್ಷನು ತಲೆದೂಗಿದನು. ಉಳಿದವರನ್ನೂ ಬದುಕಿಸಿದನು.

ನಿಜಕ್ಕೂ ಯಮರಾಜನೇ ಯಕ್ಷನ ರೂಪದಲ್ಲಿ ಬಂದು ಪಾಂಡವರನ್ನು ಪರೀಕ್ಷೆ ಮಾಡಿದನು. ಪರೀಕ್ಷೆಯಲ್ಲಿ ಧರ್ಮರಾಯನು ಗೆದ್ದನು. ಯಮಧರ್ಮನು ಧರ್ಮರಾಯನಿಗೆ ತನ್ನ ನಿಜರೂಪವನ್ನು ತೋರಿಸಿದನು. ''ನಿಮ್ಮ ವನವಾಸ ಮುಗಿಯಿತು. ಇನ್ನು ನೀವು ಅಜ್ಞಾತವಾಸಕ್ಕೆ ಸಿದ್ಧರಾಗಿರಿ. ನೀವೇ ಪಾಂಡವರೆಂದು ಯಾರಿಗೂ ತಿಳಿಯದಿರಲಿ'' ಎಂದು ಪಾಂಡವರನ್ನು ಹರಸಿದನು.



ಯಮಧರ್ಮರಾಯ ಮತ್ತು ಪಾಂಡವರು

ಪಾಂಡವರು ಅಜ್ಞಾತವಾಸಕ್ಕಾಗಿ ಅಲ್ಲಿಂದ ವಿರಾಟನಗರಿಗೆ ಹೊರಟರು.

ಈ ಯಕ್ಷ ಪ್ರಶ್ನೆಯ ಹಿಂದೆ ಒಂದು ರಹಸ್ಯವು ಅಡಗಿದೆ. ಪಾಂಡವರ ನಾಶಕ್ಕಾಗಿ ಕೌರವನು ಮಾರಣಹೋಮವನ್ನು ಮಾಡಿಸಿದ. ಕನಕನೆಂಬ ಬ್ರಾಹ್ಮಣನ ಮುಖಾಂತರ ಒಂದು ಭೂತವನ್ನು ಸೃಷ್ಟಿಸಿದ. ಕಾಡಿನಲ್ಲಿರುವ ಪಾಂಡವರನ್ನು ಈ ಭೂತವು ತಿನ್ನಬೇಕು. ಯಾರಿಗೂ ತಿಳಿಯದಂತೆ ಪಾಂಡವರು ಕಾಡಿನಲ್ಲಿ ನಾಶವಾಗಬೇಕು. ಇದು ಕೌರವನ ಉದ್ದೇಶವಾಗಿತ್ತು. ಕೃಷ್ಣನಿಗೆ ಕೌರವನ ಈ ಸಂಚು ತಿಳಿಯಿತು. ಭೂತವು ಮೂರ್ಛೆ ಹೋದವರನ್ನು ಮುಟ್ಟುವುದಿಲ್ಲ. ನೀರೊಳಗೆ ಇರುವವರನ್ನು ಕೊಲ್ಲುವುದಿಲ್ಲ. ಧರ್ಮದ ಸಾರ ಬಲ್ಲವರನ್ನು ಏನೂ ಮಾಡುವುದಿಲ್ಲ. ಇದು ಕೃಷ್ಣನಿಗೆ ತಿಳಿದಿತ್ತು.

ಭೂತವು ಪಾಂಡವರನ್ನು ನುಂಗಬೇಕೆಂದು ಹೊಂಚು ಹಾಕುತ್ತಾ ಕುಳಿತಿತ್ತು. ಆ ಹೊತ್ತಿಗೆ ಸರಿಯಾಗಿ ಕೃಷ್ಣನು ಯಮಧರ್ಮನಿಗೆ ವಿಷ ಸರೋವರವನ್ನು ರಚಿಸಲು ಹೇಳಿದ. ತಾನು ಜಿಂಕೆಯ ರೂಪ ಧರಿಸಿದ. ಬ್ರಾಹ್ಮಣನ ಆಶ್ರಮದಲ್ಲಿದ್ದ ಅರಣಿಯನ್ನು ಕೋಡಿನಲ್ಲಿ ಸಿಕ್ಕಿಸಿಕೊಂಡು, ಪಾಂಡವರ ಕೈಗೆ ಸಿಗದೆ ಕಾಡಿನಲ್ಲಿ ಓಡಿದ. ದಣಿದ ಪಾಂಡವರು ಒಬ್ಬೊಬ್ಬರಾಗಿ ಕೊಳದ ಬಳಿಗೆ ಬಂದರು. ನೀರು ಕುಡಿದರು. ಬಿದ್ದರು. ಪ್ರಜ್ಞೆತಪ್ಪಿದ ಕಿರಿಯ ಪಾಂಡವರನ್ನು ಭೂತವು ನುಂಗದೆ ಬಿಟ್ಟಿತು. ಪಾಂಡವರಲ್ಲಿ ಹಿರಿಯನಾದ ಧರ್ಮರಾಯನು ಧರ್ಮದ ಸಾರವನ್ನು ತಿಳಿದವನು. ಹೀಗಾಗಿ ಅವನಿಗೂ ಅಪಾಯ ತಟ್ಟಲಿಲ್ಲ. ಯಕ್ಷ ಪ್ರಶ್ನೆಯ ಈ ಘಟನೆಯಿಂದ ಪಾಂಡವರಿಗೆ ಲಾಭವಾಯಿತು.



# ಏಕಲವ್ಯ

ಕುರುವಂಶದ ದೊರೆಗಳ ರಾಜಧಾನಿ ಹಸ್ತಿನಾವತಿ. ಅಲ್ಲಿಗೆ ಸ್ವಲ್ಪ ದೂರದಲ್ಲಿ ಗಂಗಾನದಿ ಹರಿಯುತ್ತಿದೆ. ಆ ಗಂಗೆಯ ದಡದಲ್ಲಿ ಒಂದು ಬೇಡರಹಳ್ಳಿ. ಆ ಬೇಡರಹಳ್ಳಿಯ ಹುಡುಗ ಏಕಲವ್ಯ.

ಏಕಲವ್ಯನ ಸಾಕು ತಂದೆ ಹಿರಣ್ಯಧನು. ಆತ ಆ ಹಳ್ಳಿಯ ಪಾಳೆಯಗಾರ. ಹಿರಣ್ಯ ಧನುವಿನ ಅಣ್ಣನೇ ಏಕಲವ್ಯನ ತಂದೆ. ರಾಜರೊಡನೆ ನಡೆದ ಹೋರಾಟದಲ್ಲಿ ಏಕಲವ್ಯನ ತಂದೆ ತೀರಿಕೊಂಡ. ಆಗ ಪಾಳೆಯದ ಒಡೆತನ ಹಿರಣ್ಯಧನುವಿಗೆ ಆಯಿತು. ಏಕಲವ್ಯನನ್ನು ಸಾಕುವ ಹೊಣೆಯೂ ಅವನ ಮೇಲೆ ಬಿದ್ದಿತು. ಮರವನ್ನು ತಾಯಿಬೇರು ಕಾಪಾಡುವಂತೆ ಆತ ಏಕಲವ್ಯನನ್ನು ಸಾಕಿ ಬೆಳೆಸಿದ.

ಏಕಲವ್ಯ ಬೇಟೆ ಆಡುವುದನ್ನು ಕಲಿತ. ಬಿಲ್ಲು ವಿದ್ಯೆಯನ್ನೂ ಕಲಿತ. ಆದರೆ ಅವನಿಗೆ ಇನ್ನೂ ಕಲಿಯುವ ಹಂಬಲ. ದ್ರೋಣಾಚಾರ್ಯರಿಂದಲೇ ಬಿಲ್ಲು ವಿದ್ಯೆಯನ್ನು ತಿಳಿಯುವ ಬಯಕೆ. ದ್ರೋಣಾಚಾರ್ಯರನ್ನು ಕಾಣುವುದಕ್ಕಾಗಿ ಹಿರಣ್ಯ ಧನುವಿನಲ್ಲಿ ಅಪ್ಪಣೆ ಕೇಳುತ್ತಾನೆ.

ಹಿರಣ್ಯಧನು ಮಗನಿಗೆ ಬುದ್ಧಿವಾದ ಹೇಳಿದ.

"ಮಗೂ, ದ್ರೋಣಾಚಾರ್ಯರು ಬ್ರಾಹ್ಮಣರು. ಬೇಡರಾದ ನಮಗೆ ಅವರು ಬಿಲ್ಲುವಿದ್ಯೆ ಕಲಿಸುವುದಿಲ್ಲ. ಜೇನಿನ ಸಿಹಿಗೆ ಮಾರು ಹೋದ. ಜೇನುಹುಳದ ಕೊಡಿಯ ಮರೆತೆಯಾ? ನಾನು ನಿನಗೆ ಕಲಿಸಿದ್ದೇ ಧಾರಾಳ ಸಾಕು. ನಮ್ಮ ಪಾಳೆಯದಲ್ಲಿ ನಿನಗೆ ಯಾರೂ ಸರಿಸಾಟಿಯಿಲ್ಲ."

ಏಕಲವ್ಯ : "ಅಪ್ಪಾ, ಕೈ ಕಟ್ಟಿ ಕೂತರೆ ಏನಾದೀತು? ಪ್ರಯತ್ನ ಮಾಡುವದರಲ್ಲಿ ತಪ್ಪೇನಿದೆ? ಪ್ರಯತ್ನ ಮಾಡಿ ಸೋತರೆ ಆ ಸೋಲಿನಲ್ಲಿ ಸುಖವಿದೆ. ನನಗೆ ಹೋಗಲು ಅನುಮತಿ ಕೊಡು."

ಹಿರಣ್ಯಧನು : "ನಿನ್ನ ತಲೆಯ ಮೇಲೆ ಕೈ ಹೊತ್ತುಕೊಂಡು ಬರುತ್ತೀಯ. ಕಡ್ಡಿ ಮುರಿದ ಹಾಗೆ ಹೇಳುತ್ತೇನೆ. ದ್ರೋಣರಲ್ಲಿಗೆ ಹೋಗಬೇಡ."

ಏಕಲವ್ಯ : "ದ್ರೋಣಾಚಾರ್ಯರು ನನಗೆ ಅವಮಾನ ಮಾಡಿದರೆ ಅದೇ ಕಲಿಕೆಗೆ ಓನಾಮ." .

ಏಕಲವ್ಯನ ನಿಶ್ಚಯ, ದೃಢತೆ, ಛಲ ಅದ್ಭುತವಾದುದು. ಆತ ಮುರಿಯುವವನೇ ಹೊರತು ಮಣಿಯುವವನಲ್ಲ! ಅಂತೂ ಹಿರಣ್ಯಧನು ಒಲ್ಲದ ಮನಸ್ಸಿನಿಂದ ಒಪ್ಪಿಗೆ ನೀಡಿದ. ಏಕಲವ್ಯನ ಉತ್ಸಾಹ ಮೇರೆ ಮೀರಿತು.

"ಗುರು ದ್ರೋಣರ ಕಾಲಿಗೆ ಎರಗಿ ಕಲಿಯುವೆ. ಅವರು ನನಗೆ ವಿದ್ಯೆ ಕಲಿಸುವುದಿಲ್ಲ ಎಂದು ನಾನೇಕೆ ಭಾವಿಸಬೇಕು? ಅವರು ನನಗೆ ಕಲಿಸಿಯೇ ಕಲಿಸುತ್ತಾರೆ." ಹೀಗೆ ಯೋಚಿಸುತ್ತ ಆತ ಹಸ್ತಿನಾವತಿಗೆ ನಡೆದ.

* * * *

ಮನುಷ್ಯರಲ್ಲಿ ಮೂರು ಬಗೆಯ ಜನರುಂಟು. ಎಕ್ಕದ ಗಿಡದಲ್ಲಿ ಹೂವುಂಟು, ಹಣ್ಣಿಲ್ಲ. ಅದರಂತೆ ಕೆಲವರು ಬಾಯಿತುಂಬ ಮಾತನಾಡುತ್ತಾರೆ. ಆದರೆ ಕಾರ್ಯಸಾಧನೆ ಇಲ್ಲಿ. ಇನ್ನು ಕೆಲವರು ಕಿತ್ತಳೆಯಂತೆ. ಆ ಗಿಡದಲ್ಲಿ ಹೂವೇ ಹಣ್ಣಾಗುತ್ತದೆ. ಹಾಗೆಯೇ ಇವರು ನುಡಿದಂತೆ ನಡೆಯುತ್ತಾರೆ. ಮೂರನೆಯ ಬಗೆಯವರು ಅತ್ತಿಯ ಹಣ್ಣಿನಂತೆ. ಅತ್ತಿಯ ಮರದಲ್ಲಿ ಹೂವಿಲ್ಲ, ಹಣ್ಣುಂಟು. ಈ ಬಗೆಯ ಜನರು ಮಾತನಾಡುವುದಿಲ್ಲ. ಮಾಡಿ ತೋರಿಸುತ್ತಾರೆ. ಏಕಲವ್ಯ ಈ ಮೂರನೆಯ ಗುಂಪಿಗೆ ಸೇರಿದ ತರುಣ.

* * * *

ಹಸ್ತಿನಾವತಿಯಲ್ಲಿ ದ್ರೋಣಾಚಾರ್ಯರು ಕೌರವ ಪಾಂಡವರಿಗೆ ಬಿಲ್ಲು ವಿದ್ಯೆ ಕಲಿಸುತ್ತಿದ್ದರು. ಇವರಲ್ಲಿ ಅರ್ಜುನನೇ ಎಲ್ಲರಿಗಿಂತ ಮಿಗಿಲು. ಗುರಿಯಿಟ್ಟು ಹೊಡೆಯುವುದರಲ್ಲಿ ಆತ ಬಲು ನಿಪುಣ. ಒಮ್ಮೆ ಹೀಗಾಯಿತು. ದ್ರೋಣರು ಗಂಗೆಯಲ್ಲಿ ಸ್ನಾನ ಮಾಡುತ್ತಿದ್ದರು. ಆಗ ಒಂದು ಮೊಸಳೆ ಅವರ ಕಾಲನ್ನು ಹಿಡಿಯಿತು. ದಡದಲ್ಲಿದ್ದ ಕೌರವರು ಭಯಪಟ್ಟರು. ಏನೂ ಮಾಡದೆ ಸುಮ್ಮನೆ ನಿಂತಿದ್ದರು. ಅರ್ಜುನ ಹೆದರಲಿಲ್ಲ. ಗುರಿಯಿಟ್ಟು ಮೊಸಳೆಗೆ ಬಾಣ ಹೊಡೆದ. ಗುರುವನ್ನು ಕಾಪಾಡಿದ. ದ್ರೋಣಾಚಾರ್ಯರಿಗೆ ಸಂತೋಷವಾಯಿತು. ''ಬಿಲ್ಲುವಿದ್ಯೆಯಲ್ಲಿ ನಿನ್ನ ಹೆಸರು ಮೆರೆಯಲಿ' ಎಂದು ಹರಸಿದರು.

ಏಕಲವ್ಯನು ಹಸ್ತಿನಾವತಿಗೆ ಬಂದ. ಗುರು ದ್ರೋಣರನ್ನು ಕಂಡ. ತನಗೆ ಬಿಲ್ಲುವಿದ್ಯೆ ಕಲಿಸಿ ಎಂದು ಕೇಳಿಕೊಂಡ. ''ರಾಜಕುಮಾರರ ಜೊತೆಗೆ ನಿನಗೆ ಬಿಲ್ಲುವಿದ್ಯೆ ಕಲಿಸಲು ಸಾಧ್ಯವಿಲ್ಲ. ಆದರೂ ಅವರನ್ನು ಕೇಳಿ ನೋಡುತ್ತೇನೆ. ನೀನು ನಾಳೆ ಬಾ'' ಎಂದರು ದ್ರೋಣಾಚಾರ್ಯರು. ಕೊಟ್ಟ ಮಾತಿನಂತೆ ಅವರು ಕೌರವ ಪಾಂಡವರನ್ನು ಕೇಳಿದರು. ಕರ್ಣ ಕೊಂಕು ಮಾತನ್ನು ಆಡಿದ. ಕೌರವ ಏಕಲವ್ಯನಿಗೆ ಕಲಿಸಬಾರದೆಂದ. ಧರ್ಮರಾಯ ಕಲಿಸಬೇಕೆಂದ. ಅರ್ಜುನ ಮಾತ್ರ ಮುಖ ತಗ್ಗಿಸಿದ. ಕಾಲ ಬೆರಳಿನಿಂದ ನೆಲವನ್ನು ಗೀರುತ್ತ ನಿಂತ.

ಮರುದಿನ ಏಕಲವ್ಯ ದ್ರೋಣರ ಬಳಿಗೆ ಬಂದ. ವಿದ್ಯೆ ಕಲಿಸಿ ಎಂದು ಬೇಡಿದ.



ದ್ರೋಣರ ಪ್ರತಿಮೆಯ ಮುಂದೆ ಏಕಲವ್ಯನ ಧನುರ್ವಿದ್ಯಾಭ್ಯಾಸ

ದ್ರೋಣ : ''ಬೇಡರ ಹುಡುಗನಾದ ನಿನಗೆ ರಾಜರ ವಿದ್ಯೆ ಕಲಿಸಬಾರದು. ಹುಲಿಯು ಬೆಕ್ಕಿಗೆ ಹಾರುವುದನ್ನು ಕಲಿಸೀತೇ? ಗರುಡವು ಕಾಗೆಗೆ ರೆಕ್ಕೆ ಬಿಚ್ಚಿ ಹಾರಾಡುವುದನ್ನು ಕಲಿಸೀತೇ? ಬ್ರಾಹ್ಮಣನಾಗಿ ನಾನು ನನ್ನ ಧರ್ಮವನ್ನು ಮೀರುವಂತಿಲ್ಲ. ನಿನಗೆ ಬಿಲ್ಲುವಿದ್ಯೆ ಕಲಿಸಿ, ಆಶ್ರಯ ಕೊಟ್ಟ ಅರಸರ ಕೋಪಕ್ಕೆ ಪಾತ್ರನಾಗಲಾರೆ.''

ಏಕಲವ್ಯ : ''ನೀವು ನನಗೆ ಕಲಿಸದಿದ್ದರೂ ಚಿಂತೆಯಿಲ್ಲ. ನಿಮ್ಮ ಪಾದಸೇವೆ ಮಾಡಲು ಅಪ್ಪಣೆ ಕೊಡಿ. ಅಷ್ಟೇ ಸಾಕು.''

ದ್ರೋಣ : ''ನನ್ನನ್ನು ಧರ್ಮ ಸಂಕಟಕ್ಕೆ ಸಿಲುಕಿಸಬೇಡ. ನಾನು ಸಮಾಜದ ರೀತಿ ರಿವಾಜುಗಳನ್ನು ಮೀರಲಾರೆ. ನೀನು ಬೇರೆಲ್ಲಿಗಾದರೂ ಹೋಗಿ ಕಲಿ ಮಗೂ. ಬಿಲ್ಲು ವಿದ್ಯೆಯಲ್ಲಿ ಜಾಣನಾಗು.''

ಏಕಲವ್ಯ : ''ನಿಮ್ಮ ಹರಕೆಯೇ ನನ್ನ ಬಿಲ್ಲು ವಿದ್ಯೆಗೆ ಓನಾಮ.'' ದ್ರೋಣರಿಗೆ ನಮಸ್ಕಾರ ಮಾಡಿ ಏಕಲವ್ಯ ಊರಿಗೆ ಹೊರಟ.

* * * *

'ಯಾವುದಕ್ಕೂ ಮನಸ್ಸು ಮುಖ್ಯ. ಮನಸ್ಸಿದ್ದರೆ ಮಾರ್ಗವಿದೆ. ಕಲಿಯುವ ಮನಸಿದ್ದರೆ ಒಂದು ಮಣ್ಣಿನ ಬೊಂಬೆ ಕೂಡಾ ಕಲಿಸುವುದು' ಹೀಗೆ ಯೋಚಿಸುತ್ತಾ ಏಕಲವ್ಯನು ತನ್ನ ಊರಿಗೆ ಬಂದ. ದ್ರೋಣಾಚಾರ್ಯರು ಬಿಲ್ಲುವಿದ್ಯೆ ಕಲಿಸಲು ಒಪ್ಪದಿದ್ದರೆ ಏನಂತೆ? ಅವರೇ ನನ್ನ ಗುರುಗಳು. ಅವರನ್ನೇ ನಾನು ಮನಸಾ ಗುರುವೆಂದು ಒಪ್ಪಿಕೊಂಡಿರುವೆ. ಅವರ ಮಣ್ಣಿನ ಬೊಂಬೆಯನ್ನು ಮಾಡುವೆ. ಅದನ್ನೇ ಗುರುವೆಂದು ಭಾವಿಸಿ ಬಿಲ್ಲುವಿದ್ಯೆ ಕಲಿಯುವೆ ಎಂದು ಏಕಲವ್ಯ ನಿಶ್ಚಯಿಸಿದ. ಅಂತೆಯೇ ದ್ರೋಣರ

ಮಣ್ಣಿನ ಮೂರ್ತಿಯನ್ನು ಮಾಡಿ ಅರಳೀಕಟ್ಟೆಯಲ್ಲಿಟ್ಟ. ದಿನವೂ ಆ ಮೂರ್ತಿಗೆ ಪೂಜೆ ಸಲ್ಲಿಸಿ ಅಭ್ಯಾಸ ನಡೆಸಿದ.

ಏಕಲವ್ಯನು ''ಗುರುಗಳೇ, ಹೀಗೆ ಬಾಣ ಬಿಡಲೇ'' ಎಂದು ಕೇಳುತ್ತಾನೆ. ತಾನೇ ಉತ್ತರ ಹೇಳುತ್ತಾನೆ. ತನ್ನಷ್ಟಕ್ಕೆ ತಾನೇ ಮಾತನಾಡುತ್ತಾನೆ. ಅನ್ನ ಆಹಾರದ ಗೊಡವೆಯಿಲ್ಲ. ಭಯ, ನಿದ್ರೆಗಳ ಪರಿವೆಯಿಲ್ಲ. ಮನೆಯ ಚಿಂತೆಯಿಲ್ಲ. ಒಂದೇ ಮನಸ್ಸಿನಿಂದ ಅಭ್ಯಾಸ ನಡೆಸುತ್ತಾನೆ. ಸತತ ಅಭ್ಯಾಸದಿಂದ ಅವನೀಗ ಜಾಣನಾಗಿದ್ದಾನೆ. ಬಾಣಗಳನ್ನು ಹೊಡೆದು ಬಾವಿಯ ತಳದಲ್ಲಿರುವ ಆಮೆಯನ್ನು ಮೇಲೆತ್ತುತ್ತಾನೆ. ಕೇವಲ ದನಿ ಕೇಳಿ ಜಿಂಕೆಗಳನ್ನು ಹೊಡೆದು ಕೆಡಹುತ್ತಾನೆ. ಬೊಗಳುವ ನಾಯಿಗಳ ಬಾಯೊಳಗೆ ನೂರಾರು ಬಾಣ ತುಂಬುತ್ತಾನೆ. ಎರಡೂ ಕೈಗಳಿಂದ ಬಾಣ ಬಿಡುವ ಕೈ ಚಳಕ ಸಾಧಿಸಿದ್ದಾನೆ.

ಹಿರಣ್ಯಧನುವಿಗೆ ಮಗನ ನಡತೆ ಅರ್ಥ ಆಗವುದಿಲ್ಲ. ಈ ಬಗೆಯ ಸಾಹಸ, ಛಲ ಏಕೆ ಎಂದು ತಿಳಿಯುವುದಿಲ್ಲ. ತಿನ್ನುವುದಕ್ಕೆ ಕಾಡಿನಲ್ಲಿ ಬೇಕಾದಷ್ಟು ಮೃಗಗಳಿವೆ. ಅವನ್ನು ಗುರಿಯಿಟ್ಟು ಹೊಡೆದರಾಯಿತು. ಕೋಳಿ, ಪಾರಿವಾಳಗಳನ್ನು ಒಯ್ಯುವ ಹದ್ದು, ಡೇಗೆಗಳನ್ನು ಹೊಡೆದರೆ ಸಾಕು. ಕುರಿ, ಆಕಳನ್ನು ತಿನ್ನುವ ಹುಲಿಗಳನ್ನು ಬೇಟೆಯಾಡಿದರೆ ಸಾಕು. ಕಾಡಿನಲ್ಲಿ ಈಗ ನೆಮ್ಮದಿ ಇದೆ. ಇತರ ಬೇಡರ ಜೊತೆ ಜಗಳವಿಲ್ಲ. ನಾಡಿನಲ್ಲಿ ಯುದ್ಧ ಭೀತಿಯಿಲ್ಲ. ಹೀಗಿರುವಾಗ ಇರುವುದರಲ್ಲೇ ತೃಪ್ತಿಯನ್ನು ಕಾಣಬೇಕು. ಅದನ್ನು ಬಿಟ್ಟು, ಏಕಲವ್ಯ ಹೀಗೇಕೆ ಹೆಣಗುತ್ತಿದ್ದಾನೆ? ಎಂದು ಹಿರಣ್ಯಧನು ಚಿಂತಿಸುತ್ತಾನೆ.

* * * *

ಕಷ್ಟಪಟ್ಟು ವಿದ್ಯೆ ಕಲಿತಾಯಿತು. ಇನ್ನು ಗುರು ಕಾಣಿಕೆ ನೀಡಬೇಕು ಎಂದು ಏಕಲವ್ಯ ಯೋಚಿಸುತ್ತಾನೆ. ತಂದೆ ಹಿರಣ್ಯಧನುವಿನ ಬಳಿಗೆ ಬರುತ್ತಾನೆ. ಅನುಮತಿ ಬೇಡುತ್ತಾನೆ. ತಂದೆ ಎಚ್ಚರಿಕೆ ನೀಡುತ್ತಾನೆ.



ಬೇಟೆ ನಾಯಿಯ ಬಾಯಿಯಲ್ಲಿ ಬಾಣಗಳು

ಹಿರಣ್ಯಧನು : ''ಸಾಲದೆ ಹಾವಿನ ಬಿಲದ ಬಳಿ ಪುಂಗಿ ಊದಿದ್ದು? ಬಿಲದ ಒಳಗಿರುವ ಹಾವನ್ನು ಕೋಲು ಕುಕ್ಕಿ ಕೆಣಕಬೇಕೇ? ಕಾಣಿಕೆ ಕೊಡುತ್ತೀಯಾ? ಗುರುಗಳು ನಿನ್ನ ಕೈಯನ್ನೇ ಕಾಣಿಕೆಯಾಗಿ ಕೇಳಿದರೆ?''

ಏಕಲವ್ಯ : ''ಥಟ್ಟನೆ ಕೊಟ್ಟು ಬಿಡುತ್ತೇನೆ. ಗುರುಗಳು ಕೇಳುವುದು ಹೆಚ್ಚೋ, ನಾನು ಕೊಡುವುದು ಹೆಚ್ಚೋ? ಅವರು ಕೇಳಿದ್ದನ್ನು ಕೊಡದಿದ್ದರೆ ಈ ಕೈಯಿದ್ದು ಏನು ಪ್ರಯೋಜನ? ಬಲಗೈ ಹೋದರೇನು? ಎಡಗೈ ಇಲ್ಲವೆ?- ಕತ್ತಿಯಿಂದ ಕಡಿಯಲು, ಗದೆಯಿಂದ ಬಡಿಯಲು, ಕಾಲಿನಿಂದ ಬಿಲ್ಲು ಹಿಡಿಯುತ್ತೇನೆ. ಹಲ್ಲಿನಿಂದ ಬಿಲ್ಲಿನ ಹಗ್ಗ ಎಳೆಯುತ್ತೇನೆ. ಎಡಗೈಯಿಂದ ಬಾಣ ಹೂಡಿ ಹೊಡೆಯುತ್ತೇನೆ. ಬಿಲ್ಲುವಿದ್ಯೆ ಕಲಿತೆನೆಂಬ ತೃಪ್ತಿಯೇ ಸಾಕು ನನಗೆ. ಬೇರೇನೂ ಬೇಡ. ಕೊಡು ಅಪ್ಪಣೆಯನ್ನು.''

ಹಿರಣ್ಯಧನುವಿಗೆ ಮಗನ ಮಾತು ಆಶ್ಚರ್ಯವನ್ನು ಉಂಟು ಮಾಡುತ್ತದೆ. ಅವನ ನಡತೆ ಕಗ್ಗಂಟಾಗಿ ಕಾಣುತ್ತದೆ. ಉಪಾಯವಿಲ್ಲದೆ ಒಪ್ಪಿಗೆ ನೀಡುತ್ತಾನೆ.

ಅಷ್ಟು ಹೊತ್ತಿಗೆ ಸರಿಯಾಗಿ ದ್ರೋಣಾಚಾರ್ಯರು ಬೇಟೆಯಾಡುತ್ತ ಇವರು ಇರುವ ಪಾಳೆಯಕ್ಕೆ ಬರುತ್ತಾರೆ. ಏಕಲವ್ಯನಿಗೆ ಅರಸುವ ಮದ್ದಿನ ಬಳ್ಳಿ ಕಾಲಿಗೆ ತೊಡರಿದಂತೆ ಆಯಿತು. ಗುರು ದ್ರೋಣರನ್ನು ಮನೆಗೆ ಕರೆತರಬೇಕು. ತಾನು ಮಾಡಿದ ಮಣ್ಣಿನ ಬೊಂಬೆಯನ್ನು ಅವರಿಗೆ ತೋರಿಸಬೇಕು ಎಂದು ಉತ್ಸಾಹದಿಂದ ಹೊರಡುತ್ತಾನೆ. ತಂದೆಯ ಮನಸ್ಸು ತಡೆಯುವುದಿಲ್ಲ. ಮಗನಿಗೆ ಅಪಾಯ ತಪ್ಪಿದ್ದಲ್ಲ. ಆದ್ದರಿಂದ ಅವನನ್ನು ನೆರಳಿನಂತೆ ಹಿಂಬಾಲಿಸಬೇಕು. ಗುರು ಶಿಷ್ಯರ ಮಾತುಕತೆಯನ್ನು ಆಲಿಸಬೇಕು ಎಂದುಕೊಂಡು ಹಿರಣ್ಯಧನು ಏಕಲವ್ಯನನ್ನು ಹಿಂಬಾಲಿಸುತ್ತಾನೆ.

* * * *

ಇತ್ತ ಕೌರವ ಪಾಂಡವರು ಬೇಟೆಯಾಡುತ್ತಾ ಮುಂದೆ ಸಾಗಿದ್ದಾರೆ. ದ್ರೋಣರು ಬೇಡರಹಳ್ಳಿಯ ಬಯಲಿಗೆ ಬಂದರು. ಅಲ್ಲಿರುವ ಅರಳೀಕಟ್ಟೆಯ ಮೇಲೆ ಕುಳಿತರು. ಅವರ ಮನಸ್ಸು ಏನನ್ನೋ ಚಿಂತಿಸುತ್ತಿದೆ. ಕೌರವ ಪಾಂಡವರಲ್ಲಿ ಹೊಗೆಯಾಡುತ್ತಿರುವ ಹಗೆ ಅವರ ಚಿಂತೆಗೆ ಕಾರಣವಾಗಿದೆ.

ಆಗ ಅರ್ಜುನನು ಜೋಲು ಮೋರೆ ಹಾಕಿಕೊಂಡು ಅಲ್ಲಿಗೆ ಬರುತ್ತಾನೆ. ಅರ್ಜುನನ ಬೇಸರಕ್ಕೆ ಕಾರಣವೇನೆಂದು ಗುರುಗಳು ಕೇಳುತ್ತಾರೆ.

ಅರ್ಜುನ : ''ಇನ್ನು ಮುಂದೆ ನಿಮ್ಮ ಪಟ್ಟಶಿಷ್ಯ ನಾನೇ ಎಂದು ಹೇಳಿಕೊಳ್ಳಲಾರೆ.''

ದ್ರೋಣ : ''ಏಕೆ? ಏನಾಯಿತು? ಈಗೇಕೆ ನಿನಗೆ ಈ ಸಂಶಯ? ನೀನು ನನ್ನ ಪಟ್ಟಶಿಷ್ಯನೇ. ನನ್ನ ಮಾತು ಹುಸಿಯಾಗುವುದಿಲ್ಲ.''

ಅರ್ಜುನ : ''ಗುರುಗಳೇ, ನಮ್ಮ ಬೇಟೆ ನಾಯಿಗಳ ಬಾಯನ್ನು ಯಾರೋ ಬಾಣದಿಂದ ತುಂಬಿದ್ದಾರೆ. ಇದು ಆಶ್ಚರ್ಯಕರ. ನಿಮ್ಮಲ್ಲಿ ನಾನು ಬಿಲ್ಲುವಿದ್ಯೆಯನ್ನೆಲ್ಲ ಕಲಿತೆ. ಆದರೆ ಈ ಕೈ ಚಳಕ ಮಾತ್ರ ನನಗೆ ಸಿದ್ಧಿಸಲಿಲ್ಲ. ಈ ಸಾಹಸ ಮಾಡಿದವನು ಯಾರು ಗೊತ್ತೆ?''

ದ್ರೋಣ : ''ಯಾರಪ್ಪಾ ನಮ್ಮ ನಾಯಿಗಳ ಬಾಯಿ ಮುಚ್ಚಿಸಿದವನು?''

ಅರ್ಜುನ : ''ಬೇಡರ ಹುಡುಗನಂತೆ. ಅವನ ಹೆಸರು ಏಕಲವ್ಯನಂತೆ. ನೋಡಿ, ಇಗೋ ಇಲ್ಲಿದೆಯಲ್ಲ, ಈ ಮಣ್ಣಿನ ಬೊಂಬೆ ನಿಮ್ಮದಂತೆ. ಈ ಗೊಂಬೆಯ ಎದುರು ಆತ ನಿತ್ಯವೂ ಅಭ್ಯಾಸ ಮಾಡುತ್ತಾನಂತೆ. ನೀವು ಅವನ ಗುರುವಂತೆ.''



ಏಕಲವ್ಯ ಬಲಗೈ ಹೆಬ್ಬೆರಳನ್ನು ಕತ್ತರಿಸಿಕೊಂಡಿರುವುದು

ಅರ್ಜುನನು ಹೇಳಿದ್ದನ್ನು ಕೇಳಿ ದ್ರೋಣಾಚಾರ್ಯರಿಗೆ ಆಶ್ಚರ್ಯವಾಗುತ್ತದೆ. ಆ ಮಣ್ಣಿನ ಬೊಂಬೆಯನ್ನು ಕಂಡು ಆಶ್ಚರ್ಯದ ಮೇಲೆ ಆಶ್ಚರ್ಯವಾಗುತ್ತದೆ. ಏಕಲವ್ಯನು ಹಿಂದೊಮ್ಮೆ ತನ್ನ ಬಳಿಗೆ ಬಂದಿದ್ದು ನೆನಪಾಗುತ್ತದೆ. ಅಷ್ಟು ಹೊತ್ತಿಗೆ ಸರಿಯಾಗಿ ಏಕಲವ್ಯನು ಅಲ್ಲಿಗೆ ಬರುತ್ತಾನೆ. ದ್ರೋಣರನ್ನು ಕಂಡು ಕಾಲಿಗೆ ಎರಗುತ್ತಾನೆ. ದ್ರೋಣರು ಆವನ ಸಾಧನೆಯನ್ನು ಹೊಗಳುತ್ತಾರೆ. ಆಗ ಅರ್ಜುನನು ಹುಬ್ಬುಗಂಟು ಹಾಕುತ್ತಾನೆ.

ಅರ್ಜುನ : ''ಬಿಲ್ಲುವಿದ್ಯೆ ಕಲಿಯಲು ಆಚಾರ್ಯರ ಅಪ್ಪಣೆ ಪಡೆದಿದ್ದೀಯಾ?''

ಏಕಲವ್ಯ : ''ಬಿಲ್ಲಾಣನಾಗು ಎಂದು ಗುರುಗಳು ನನ್ನನ್ನು ಹರಸಿದ್ದಾರೆ. ಅದೇ ನನಗೆ ಅಪ್ಪಣೆ.''

ದ್ರೋಣ : ''ನಿನ್ನ ಗುರು ನಾನಾದರೆ ಗುರದಕ್ಷಿಣೆ ಕೊಡಬೇಡವೇ?''

ಏಕಲವ್ಯ : ''ಅದಕ್ಕೆಂದೇ ನಾನು ಬಂದೆ ಗುರುಗಳೇ. ನೀವೇನು ಕೇಳಿದರೂ ನಾನು ಕೊಡಲು ಸಿದ್ಧ. ನಿಮಗಾಗಿ ನನ್ನ ಜೀವ ಕೊಡಲೂ ನಾನು ತಯಾರಿದ್ದೇನೆ.''

ದ್ರೋಣ : ''ಹಾಗಿದ್ದರೆ ನಿನ್ನ ಬಲಗೈಯ ಹೆಬ್ಬೆರಳು ಕೊಡುವೆಯಾ?''

ಗುರುಗಳು ಹೇಳಿದ್ದೇ ತಡ, ಏಕಲವ್ಯ ಮಂಡಿ ಊರಿದ. ತನ್ನ ಬಲಗೈಯ ಹೆಬ್ಬೆರಳನ್ನು ಕತ್ತರಿಸಿ ಅವರ ಕಾಲ ಬುಡದಲ್ಲಿ ಇಟ್ಟ. ನೆತ್ತರು ಧಾರಾಕಾರವಾಗಿ ಹರಿಯಿತು. ಏಕಲವ್ಯ ಅಂಜಲಿಲ್ಲ, ಅಳುಕಲಿಲ್ಲ. ಅರ್ಜುನ ಗಾಬರಿಯಾದ. ದ್ರೋಣರು ಒಂದು ಹೆಜ್ಜೆ ಹಿಂದಿಟ್ಟು ಮೂಕವಾಗಿ ನಿಂತರು.

* * * *

ಮರದ ಮರೆಯಲ್ಲಿದ್ದ ಹಿರಣ್ಯಧನು ಬಂದ ಏಕಲವ್ಯನ ಗಾಯಕ್ಕೆ ತಣ್ಣೀರು ಬಟ್ಟೆ ಕಟ್ಟಿದ. ಸಂತೈಸಿದ. ಬಳಿಕ ಕೋಪದಿಂದ ದ್ರೋಣರನ್ನು ಕುರಿತು.

''ಆಚಾರ್ಯರೇ, ಬೇಡರ ಹುಡುಗನನ್ನು ಮುಟ್ಟಿ ನಿಮ್ಮ ಮಡಿಯನ್ನು ಹಾಳು ಮಾಡಿಕೊಳ್ಳಬೇಡಿ. ನಿಮ್ಮ ಪಟ್ಟೆಯ ಬಟ್ಟೆಯನ್ನು ನೆತ್ತರಲ್ಲಿ ನೆನೆಸಿ ಹೊಲಸು ಮಾಡಬೇಡಿ. ನಿಮ್ಮ ಕಣ್ಣಲ್ಲಿ ನೆತ್ತರಿಲ್ಲವೇ? ನೀವು ಬ್ರಾಹ್ಮಣರಂತೆ? ಆಚಾರ್ಯರಂತೆ? ನಿಮ್ಮ ಶಾಸ್ತ್ರವನ್ನೆಲ್ಲ ಸುಟ್ಟಿರಾ? ಧರ್ಮವನ್ನು ಯಾವ ಕಾಡಿಗೆ ಅಟ್ಟಿದಿರಿ? ಹೀಗೇಕೆ ಹಿಂಸೆ ಮಾಡಿದಿರಿ? ನಿಮಗೇನು ಲಾಭವಾಯಿತು?'' ಎಂದು ಬೈದ.

ದ್ರೋಣ : ''ಹಾಸ್ಯಕ್ಕೆಂದು ಬೆರಳು ಕೇಳಿದೆ. ಮಾತು ಮುಗಿಸುವ ಮುನ್ನವೇ ಕತ್ತರಿಸಿಕೊಟ್ಟ. ನನಗೆ ಶಾಪ ನೀಡು.''

ಹಿರಣ್ಯಧನು : ''ನಿಮ್ಮನ್ನು ಶಪಿಸಲು ನಾನು ಯಾರು? ಅರ್ಜುನನಿಗಿಂತ ಇವನು ಒಂದು ಕೈ ಮೇಲಾಗಬಾರದು ಎಂದು ಬೆರಳು ಕೇಳಿದಿರಲ್ಲವೆ? ನೀವು ಮಾಡಿದ ಕೆಟ್ಟ ಕೆಲಸ ನಿಮಗೇ ಕೆಡುಕು ಬಗೆಯುತ್ತದೆ. ಮೇಲಿರುವ ದೇವರು ಎಲ್ಲವನ್ನೂ ನೋಡಿಕೊಳ್ಳುತ್ತಾನೆ.''

ಏಕಲವ್ಯ : ''ಅಪ್ಪಾ, ಗುರುವನ್ನು ನಿಂದಿಸಬೇಡ. ಗುರುವಿನ ಕರುಣೆ ಒಂದಿದ್ದರೆ ಹೇಗಾದರೂ ಬದುಕಬಹುದು. ಗುರುಗಳೇ, ಅರಿಯದೆ ಆಡಿದ ತಂದೆಯನ್ನು ಕ್ಷಮಿಸಿ.''

ದ್ರೋಣ : ''ಮಗೂ, ನಿನ್ನ ದೃಢತೆಗೆ ಮೆಚ್ಚಿದೆ. ನನ್ನನ್ನು ಕ್ಷಮಿಸಿಬಿಡು.''

ಏಕಲವ್ಯ : ''ಗುರುಗಳು ನನ್ನಲ್ಲಿ ಕ್ಷಮೆ ಬೇಡಬಾರದು. ಅದು ನಿಮಗೆ ಭೂಷಣವಲ್ಲ. ನಾನು ಎಷ್ಟಾದರೂ ನಿಮ್ಮ ಶಿಷ್ಯ. ನಿಮಗಿಂತ

ಕಿರಿಯವನು. ಇದರಲ್ಲಿ ನಿಮ್ಮದೇನೂ ತಪ್ಪಿಲ್ಲ.''

ದ್ರೋಣ : ''ನೂರು ಕಾಲ ಬಾಳು ಮಗೂ. ಬಿಲ್ಲಾಣನಾಗು. ನಿನ್ನ ಬಯಕೆ ಈಡೇರಲಿ. ನಿನಗೆ ಒಳ್ಳಿತಾಗಲಿ.''

ತಾನು ಬಗೆದ ಕೇಡು ತನಗೇ ಕೇಡು ತರುತ್ತದೆ ಎಂದು ಹಿರಣ್ಯಧನು ಹೇಳಿದನಲ್ಲ? ಆ ಮಾತಿನ ಅರ್ಥವನ್ನು ನೆನೆಯುತ್ತ ದ್ರೋಣಾಚಾರ್ಯರು ಅರ್ಜುನನೊಂದಿಗೆ ಶಿಬಿರಕ್ಕೆ ತೆರಳಿದರು.

ಗುರುವನ್ನು ಕಂಡು ಗುರುಕಾಣಿಕೆ ನೀಡಿದೆನಲ್ಲಾ ಎಂಬ ತೃಪ್ತಿ ಏಕಲವ್ಯನಿಗೆ. ಎಚ್ಚರಿಕೆ ನೀಡಿದರೂ ಆಗಬಾರದ್ದು ಆಗಿ ಹೋಯಿತಲ್ಲ ಎಂಬ ವ್ಯಥೆ ಹಿರಣ್ಯಧನುವಿಗೆ. ಹೀಗೆ ತಂದೆ-ಮಗ ಯೋಚಿಸುತ್ತ ಪಾಳೆಯಕ್ಕೆ ನಡೆದರು.

''ಬೇರೆಯವರ ಕಲೆ ಮೆಚ್ಚಿ ನಾಶ ಮಾಡುವುದು ದುರಾತ್ಮರ ಕರ್ಮ. ಪತಿತರನ್ನು ಮೇಲೆತ್ತುವುದು ಮಹಾತ್ಮರ ಧರ್ಮ ಜಾತಿಮತ ಭೇದಗಳನ್ನು [illegible] ಒಗ್ಗಟ್ಟಿನಿಂದ ಬಾಳುವುದೇ ಜೀವನದ ಮರ್ಮ.''



ಕನ್ನಡ ವಿಶ್ವವಿದ್ಯಾಲಯವು ನವಸಾಕ್ಷರರಿಗೆ ಮತ್ತು ಪ್ರಾಥಮಿಕ ಹಂತದಿಂದ ಪದವಿ ಮಟ್ಟದವರೆಗೆ ಉತ್ತಮ ಹಾಗೂ ಉಪಯುಕ್ತವಾದ ಪಠ್ಯಪುಸ್ತಕಗಳನ್ನು ನಿರ್ಮಾಣ ಮಾಡುವ ಸಲುವಾಗಿ 'ಪಠ್ಯಪುಸ್ತಕ ರಚನಾ ವಿಭಾಗ'ವನ್ನು ತೆರೆದಿದೆ. ಇದರ ಮೊದಲ ಪ್ರಯತ್ನವಾಗಿ ನವಸಾಕ್ಷರರಿಗಾಗಿ ಪಠ್ಯಪುಸ್ತಕ ರಚನೆ ಮಾಡಬೇಕೆಂದು ಚಿಂತಿಸುತ್ತಿರುವಾಗ ಬೆಂಬಲಕ್ಕೆ ಬಂದುದು ಲೋಕ ಶಿಕ್ಷಣ ಇಲಾಖೆ. ನವಸಾಕ್ಷರರಿಗಾಗಿ ಪುಸ್ತಕ ಬರೆಸುವ ತಮ್ಮಲ್ಲಿದ್ದ ಯೋಜನೆಯನ್ನು ಅವರು ನಮ್ಮ ವಿಶ್ವವಿದ್ಯಾಲಯಕ್ಕೆ ವಹಿಸಿಕೊಟ್ಟರು. ವಿಶ್ವವಿದ್ಯಾಲಯವು ಈ ಯೋಜನೆಯನ್ನು ಸಂತಸದಿಂದ ಸ್ವೀಕರಿಸಿ, ಕೂಡಲೇ ನಾಡಿನ ಪ್ರಖ್ಯಾತ ಲೇಖಕರನ್ನು, ಭಾಷಾತಜ್ಞರನ್ನು, ಶಿಕ್ಷಣತಜ್ಞರನ್ನು ಒಳಗೊಂಡಂತೆ ಸಲಹಾ ಸಮಿತಿಯನ್ನು ರಚಿಸಿ, ಅವರೆಲ್ಲರ ಅಭಿಪ್ರಾಯ, ಸಲಹೆ, ಸಹಕಾರಗಳನ್ನು ಕೇಳಿ ಕಾರ್ಯೋನ್ಮುಖವಾಯಿತು. ಪುಸ್ತಕಗಳ ವಸ್ತು, ಭಾಷೆ, ಮುದ್ರಣ ವಿನ್ಯಾಸ, ಚಿತ್ರಗಳ ಮಹತ್ವ, ಸಾಹಿತ್ಯಕ ಗುಣಮಟ್ಟ ಇತ್ಯಾದಿಗಳನ್ನು ಕುರಿತು ಸಮಿತಿಯು ಅನೇಕ ಸಲ ಚರ್ಚಿಸಿ ಯೋಜನೆಯನ್ನು ಅನುಷ್ಠಾನಗೊಳಿಸಲು ಸೂಚಿಸಿತು.

ನವಸಾಕ್ಷರರಿಗಾಗಿ ಕನ್ನಡದಲ್ಲಿ ಹಾಗೂ ದೇಶದ ಇತರ ಭಾಷೆಗಳಲ್ಲಿ ಈಗಾಗಲೇ ಪ್ರಕಟವಾಗಿರುವ ಪುಸ್ತಕಗಳನ್ನೆಲ್ಲ ಒಟ್ಟುಗೂಡಿಸಿ, ಅವುಗಳ ಮಾದರಿ, ಮಾಹಿತಿಗಳನ್ನೆಲ್ಲ ಭಾಷಾತಜ್ಞರಿಂದ ಪರಿಶೀಲಿಸಲಾಯಿತು. ಜೊತೆಗೆ ಈ ಕ್ಷೇತ್ರದ ಅನುಭವಿ ಕ್ಷೇತ್ರಸಹಾಯಕರನ್ನು ನೇಮಿಸಿಕೊಂಡು ಅವರಿಗೆ ಕಮ್ಮಟಗಳನ್ನು ನಡೆಸಿ, ಪ್ರಶ್ನಾವಳಿ ತಯಾರಿಸಿಕೊಟ್ಟು, ಅವರನ್ನು ರಾಜ್ಯದಾದ್ಯಂತ ಆಯ್ದ ಜಿಲ್ಲೆ, ತಾಲೂಕುಗಳಿಗೆ ಕಳುಹಿಸಿ ಈ ಆಂದೋಲನದಲ್ಲಿ ಕಲಿತವರಿಂದ ಮತ್ತು ಕಲಿಯುತ್ತಿರುವವರಿಂದ ಅದರ ಗುಣದೋಷಗಳ ಬಗ್ಗೆ ಅಭಿಪ್ರಾಯ ಸಲಹೆಗಳನ್ನು ಸಂಗ್ರಹಿಸಿ, ಅನಂತರ ಅವುಗಳನ್ನೆಲ್ಲ ವಿಶ್ವವಿದ್ಯಾಲಯದ ಗಣಕಯಂತ್ರದಲ್ಲಿ ವಿಶ್ಲೇಷಿಸಲಾಯಿತು; ಮತ್ತೆ ಮತ್ತೆ ಕ್ಷೇತ್ರಗಳಿಗೆ ಹೋಗಿ, ಕ್ಷೇತ್ರ ಸಹಾಯಕರು ನೀಡಿದ್ದ ಮಾಹಿತಿಗಳನ್ನೆಲ್ಲ ಮರು ಪರಿಶೀಲನೆ ಮಾಡಿ, ನಂತರ ನವಸಾಕ್ಷರರ ಅಪೇಕ್ಷೆಗೆ ಅನುಗುಣವಾಗಿ ವಿಷಯದ ಆದ್ಯತೆಗಳನ್ನು ನಿರ್ಧರಿಸಿಕೊಂಡು ಪುಸ್ತಕ ರಚನೆಗೆ ತೊಡಗಲಾಯಿತು; ಪ್ರಖ್ಯಾತ ಲೇಖಕರು ನಮ್ಮ ವಿಶ್ವವಿದ್ಯಾಲಯದ ಪ್ರಾಧ್ಯಾಪಕರ ಜೊತೆ ಚರ್ಚಿಸಿ ತಮ್ಮ ಹಸ್ತಪ್ರತಿಗಳಿಗೆ ಅಂತಿಮ ರೂಪ ಕೊಟ್ಟರು. ಕಲಾವಿದರು ವಿಷಯಗಳಿಗೊಪ್ಪುವ ಚಿತ್ರಗಳನ್ನು ಬರೆದುಕೊಟ್ಟರು. ಹೀಗೆ ಸಿದ್ಧಗೊಂಡ ಹಸ್ತಪ್ರತಿಗಳನ್ನು ನವಸಾಕ್ಷರರ ಬಳಿ ಕೊಂಡೊಯ್ದು ಅವರ ಮುಂದೆ ಪಠಿಸಿ ನಂತರ ಅವರ ಅಭಿಪ್ರಾಯ, ಪ್ರತಿಕ್ರಿಯೆಗಳನ್ನು ಅಳವಡಿಸಿ ಹಸ್ತಪ್ರತಿಯನ್ನು ಅಂತಿಮಗೊಳಿಸಲಾಯಿತು.

ನಮ್ಮ ಬಹುಸಂಖ್ಯಾತ ಸಮುದಾಯ ಅನಕ್ಷರಸ್ಥರೇ ಹೊರತು ಅವಿದ್ಯಾವಂತರಲ್ಲ. ನೃಪತುಂಗ ಹೇಳುವಂತೆ ಅವರು "ಚದುರರ್ ನಿಜದಿಂ ಕುರಿತೋದದೆಯುಂ ಕಾವ್ಯ ಪ್ರಯೋಗ ಪರಿಣತ ಮತಿಗಳ್". ಅನುಭವದಲ್ಲಿ, ವಿವೇಕದಲ್ಲಿ, ವ್ಯವಹಾರದಲ್ಲಿ, ತಿಳುವಳಿಕೆಯಲ್ಲಿ ಆ ಜನ ಚದುರರು. ಹೀಗೆಂದು ಅವರನ್ನು ಅಕ್ಷರದಲಿತರನ್ನಾಗಿಯೂ ಉಳಿಸುವಂತಿಲ್ಲ. ಅವರಲ್ಲಿ ಅಕ್ಷರ ಕಲಿಯುವ ಸಾಮರ್ಥ್ಯವಿದೆ. ಕಲಿಸುವ ಹೊಣೆ ಸರ್ಕಾರಗಳ, ವಿಶ್ವವಿದ್ಯಾಲಯಗಳ ಮೇಲಿದೆ. ಈ ನಿಟ್ಟಿನಲ್ಲಿ ದೇಶದಾದ್ಯಂತ ಸಾಕ್ಷರತಾ ಆಂದೋಲನ ನಡೆಯುತ್ತಿದೆ. ಆದರೆ ಈ ಅಕ್ಷರ ಸಂಸ್ಕೃತಿಯ ಆಂದೋಲನದಲ್ಲಿ ಕಲಿತವರಿಗೆ ಮತ್ತು ಕಲಿಯುವವರಿಗೆ ಉತ್ತಮ ಗುಣಮಟ್ಟದ ಪುಸ್ತಕಗಳ ಅವಶ್ಯಕತೆ ಇದೆ. ಕಲಿತವರು ಮರೆಯದಂತೆ, ಕಲಿಕೆಯನ್ನು ಮುಂದುವರಿಸುವಂತೆ ನೋಡಿಕೊಳ್ಳುವುದು ಎಲ್ಲರ ಕರ್ತವ್ಯ.

ಕನ್ನಡ ವಿಶ್ವವಿದ್ಯಾಲಯವು ನಾಡಿನ ಹಲವು ವಿದ್ವಾಂಸರೊಂದಿಗೆ ಸೇರಿ ನಡೆಸಿದ ಒಂದು ಸಾಮೂಹಿಕ ಪ್ರಯತ್ನದ ಫಲವಾಗಿ ಈ ಪುಸ್ತಕ ರೂಪತಾಳಿದೆ. ನವಸಾಕ್ಷರರು ಈ ಪುಸ್ತಕವನ್ನು ಪ್ರೀತಿಯಿಂದ ಸ್ವೀಕರಿಸುತ್ತಾರೆಂದು ನಂಬಿದ್ದೇವೆ. ಈ ಯೋಜನೆಯ ಯಶಸ್ಸಿಗೆ ಕಾರಣರಾಗಿರುವ ಉನ್ನತ ಸಲಹಾ ಸಮಿತಿ ಹಾಗೂ ಸಂಪಾದಕ ಸಮಿತಿಯ ಸದಸ್ಯರಿಗೆ, ಲೇಖಕರಿಗೆ, ಕಲಾವಿದರಿಗೆ ಹಾಗೂ ಈ ಯೋಜನೆಯಲ್ಲಿ ಪ್ರತ್ಯಕ್ಷವಾಗಿ, ಪರೋಕ್ಷವಾಗಿ ನಮ್ಮೊಡನೆ ಪಾಲ್ಗೊಂಡವರೆಲ್ಲರಿಗೂ ನಮ್ಮ ಹೃತ್ಪೂರ್ವಕವಾದ ವಂದನೆಗಳು. ನಮ್ಮ ವಿಶ್ವವಿದ್ಯಾಲಯದ ಮೇಲೆ ವಿಶ್ವಾಸವಿಟ್ಟು ಇಂತಹ ಒಂದು ಗುರುತರವಾದ ಯೋಜನೆಯನ್ನು ವಹಿಸಿಕೊಟ್ಟ ಲೋಕಶಿಕ್ಷಣ ಇಲಾಖೆಯ ನಿರ್ದೇಶಕರಾದ ಶ್ರೀ ಲೂಕೋಸ್ ವಲ್ಲತ್ತರೈ ಅವರಿಗೆ ನನ್ನ ಕೃತಜ್ಞತೆಗಳು. ಓದುಗರು ಈ ಪುಸ್ತಕದ ಬಗ್ಗೆ ತಮ್ಮ ಅಭಿಪ್ರಾಯಗಳನ್ನು ತಿಳಿಸಿದರೆ ನಮ್ಮ ಪಠ್ಯಪುಸ್ತಕ ರಚನೆಗೆ ಉಪಯೋಗವಾಗುತ್ತದೆ.

**ಚಂದ್ರಶೇಖರ ಕಂಬಾರ**
ಕುಲಪತಿಗಳು